ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 02ನೇ ಮಾರ್ಚ್, 2020

ವೈದ್ಯಕೀಯ ಸೀಟುಗಳನ್ನು ಸರ್ಕಾರಕ್ಕೆ ಬಿಟ್ಟುಕೊಡುವ ಕುರಿತು

ಶ್ರೀ ರವಿಕುಮಾರ್ ಎನ್ (ವಿಧಾನ ಸಭೆಯಿಂದ ಚುನಾಯಿತರಾದವರು) :-

103 (01) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) 2019-20ನೇ ಶೈಕ್ಷಣಿಕ ಸಾಲಿನಲ್ಲಿ ರಾಜ್ಯದಲ್ಲಿರುವ ಡೀಮ್ಡ್ ಯೂನಿವರ್ಸಿಟಿ ವೈದ್ಯಕೀಯ ಕಾಲೇಜುಗಳು ಸರ್ಕಾರಕ್ಕೆ ಎಷ್ಟು ಪ್ರಮಾಣದ ವೈದ್ಯಕೀಯ ಸೀಟುಗಳನ್ನು ಬಿಟ್ಟು ಕೊಡಬೇಕಾಗಿದೆ; ಈ ಕುರಿತು ಸರ್ಕಾರಕ್ಕೂ ವೈದ್ಯಕೀಯ ಕಾಲೇಜುಗಳ ಆಡಳಿತ ಮಂಡಳಿಗೂ ಇರುವ ಒಪ್ಪಂದವೇನು;

(ಆ) ಸದರಿ ಡೀಮ್ಡ್ ಯೂನಿವರ್ಸಿಟಿ ವೈದ್ಯಕೀಯ ಕಾಲೇಜುಗಳು ಸರ್ಕಾರಕ್ಕೆ ವೈದ್ಯಕೀಯ ಸೀಟುಗಳನ್ನು ನೀಡದಿರಲು ಕಾರಣವೇನು;

(ಇ) ಸರ್ಕಾರಕ್ಕೆ ಸೀಟುಗಳನ್ನು ಬಿಟ್ಟು ಕೊಡದಿರುವ ಡೀಮ್ಡ್ ಯೂನಿವರ್ಸಿಟಿ ವೈದ್ಯಕೀಯ ಕಾಲೇಜುಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ಸೀಟು ಬಿಟ್ಟು ಕೊಡದಿರುವ ವೈದ್ಯಕೀಯ ಕಾಲೇಜುಗಳು ಸರ್ಕಾರಕ್ಕೆ ಪಾವತಿ ಮಾಡಿರುವ ದಂಡದ ಮೊತ್ತವೆಷ್ಟು;

(ಈ) ಡೀಮ್ಡ್ ಯೂನಿವರ್ಸಿಟಿ ವೈದ್ಯಕೀಯ ಕಾಲೇಜುಗಳಿಗೆ ಸರ್ಕಾರವು ಯಾವ ಯಾವ ರಿಯಾಯಿತಿ ಸೌಲಭ್ಯಗಳನ್ನು ನೀಡುತ್ತಿದೆ; ಸರ್ಕಾರಕ್ಕೆ ಸೀಟು ಬಿಟ್ಟುಕೊಡದಿರುವ ಡೀಮ್ಡ್ ಯೂನಿವರ್ಸಿಟಿ ವೈದ್ಯಕೀಯ ಕಾಲೇಜುಗಳಿಗೆ ಸರ್ಕಾರದ ವತಿಯಿಂದ ನೀಡಲಾಗುತ್ತಿರುವ ರಿಯಾಯಿತಿ ಸೌಲಭ್ಯಗಳನ್ನು ನಿಲ್ಲಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?